ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 743

ಸದಸ್ಯರ ಹೆಸರು : ಶ್ರೀ ಅ. ದೇವೇಗೌಡ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಕೆಂಗೇರಿ ಮಾರ್ಗವಾಗಿ ಬಸ್ ನಂ.227/l ಟೌನ್‌ಹಾಲ್ ಮುಖಾಂತರ ವಿಧಾನಸೌಧ, ಹೈಕೋರ್ಟ್ ಹಾಗೂ ಈ ಭಾಗದಲ್ಲಿರುವ ಹಲವಾರು ಇಲಾಖೆಗಳ ಸರ್ಕಾರಿ ನೌಕರರುಗಳಿಗೆ ಸಮಯಕ್ಕೆ ಸರಿಯಾಗಿ ಕಛೇರಿಗೆ ಹಾಜರಾಗಲು ಉಪಯೋಗವಾಗುತ್ತಿದ್ದು, ರಾಮೋಹಳ್ಳಿಗೆ ಹೋಗುತ್ತಿದ್ದ ಬಸ್ಸನ್ನು ಏಕಾಏಕಿ ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಬಂದಿದ್ದಲ್ಲಿ, ಬದಲಿ ವ್ಯವಸ್ಥೆ ಮಾಡುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೇ) | ಘಟಕ-12ರ ಅನುಸೂಚಿ ಸಂಖ್ಯೆ:227/1ರಲ್ಲಿ ಬೆಳಗ್ಗೆ 08:30 ಗಂಟೆಗೆ ರಾಮೋಹಳ್ಳಿಯಿಂದ ಕೆಂಗೇರಿ, ಟೌನ್‌ಹಾಲ್, ವಿಧಾನಸೌಧ ಮಾರ್ಗವಾಗಿ ಶಿವಾಜಿನಗರಕ್ಕೆ ಹಾಗೂ ಸಂಜೆ 17:15 ಗಂಟೆಗೆ ಶಿವಾಜಿನಗರದಿಂದ ವಿಧಾನಸೌಧ, ಟೌನ್‌ಹಾಲ್, ಕೆಂಗೇರಿ ಮಾರ್ಗವಾಗಿ ರಾಮೋಹಳ್ಳಿಗೆ ಮತ್ತು ಘಟಕ-12ರ ಅನುಸೂಚಿ ಸಂಖ್ಯೆ:226-ಎನ್/11ರಲ್ಲಿ ಬೆಳಗ್ಗೆ 08:45 ಗಂಟೆಗೆ ರಾಮೋಹಳ್ಳಿಯಿಂದ ಕೆಂಗೇರಿ, ಟೌನ್‌ಹಾಲ್, ವಿಧಾನಸೌಧ ಮಾರ್ಗವಾಗಿ ಶಿವಾಜಿನಗರಕ್ಕೆ ಹಾಗೂ ಸಂಜೆ 17:25 ಗಂಟೆಗೆ ಹೈ-ಕೋರ್ಟ್‌ನಿಂದ ಟೌನ್‌ಹಾಲ್, ಕೆಂಗೇರಿ ಮಾರ್ಗವಾಗಿ ರಾಮೋಹಳ್ಳಿಗೆ ಸುತ್ತುವಳಿಗಳಿದ್ದು, ಸದರಿ ಸುತ್ತುವಳಿಗಳನ್ನು ವ್ಯವಸ್ಥಿತವಾಗಿ ಕಾರ್ಯಾಚರಣೆಗೊಳಿಸಲಾಗುತ್ತಿದೆ. |
| ಆ. | ಈ ಮಾರ್ಗದಲ್ಲಿ ಓಡಾಡುವ ಬಸ್‌ಗಳನ್ನು ನಿಲ್ಲಿಸಿರುವುದರಿಂದ ನೌಕರರುಗಳಿಗೆ ಹಾಗೂ ಸಾರ್ವಜನಿಕರಿಗೆ ತೊಂದರೆಯಾಗುತ್ತಿದ್ದು, ಮತ್ತೆ ಈ ಮಾರ್ಗದಲ್ಲಿ ಮೇಲ್ಕಂಡ ಬಸ್‌ಗಳನ್ನು ಪುನರಾರಂಭ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆಯೇ; ಕೈಗೊಳ್ಳದ್ದಲ್ಲಿ ಕಾರಣವೇನು; | |
| ಇ. | ಈ ಬಸ್‌ಗಳನ್ನು ಡಿಪೋ 37ಕ್ಕೆ ಬದಲಾವಣೆ ಮಾಡುವುದರಿಂದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ನೌಕರರುಗಳಿಗೆ ತುಂಬಾ ಅನುಕೂಲವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಬದಲಾವಣೆ ಮಾಡಲು ಸಂಸ್ಥೆಯು ಚಿಂತಿಸಿದೆಯೇ? | ಅನುಸೂಚಿ ಸಂಖ್ಯೆ:227/1 ಹಾಗೂ 226-ಎನ್/11ಗಳನ್ನು ಘಟಕ-12ರಿಂದ ವ್ಯವಸ್ಥಿತವಾಗಿ ಕಾರ್ಯಾಚರಣೆಗೊಳಿಸುತ್ತಿರುವುದರಿಂದ, ಘಟಕ-37ಕ್ಕೆ ವರ್ಗಾಯಿಸಲು ಚಿಂತಿಸಿರುವುದಿಲ್ಲ. |

ಸಂಖ್ಯೆ: ಟಿಡಿ 160 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು